

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2085 |
| ಮಾನ್ಯ ಸದಸ್ಯರ ಹೆಸರು | ಶ್ರೀ ಸಿ. ಎಂ. ಇಬ್ರಾಹಿಂ (ವಿಧಾನ ಸಭಾ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 17/03/2022 |
| ಉತ್ತರಿಸುವ ಸಚಿವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಟ್ಟಡ ಕಾರ್ಮಿಕರಿಗೆ ಸದ್ಯ ನೀಡಲಾಗುತ್ತಿರುವ ಸೌಲಭ್ಯಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ ನೋಂದಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮತ್ತು ಅವರ ಅವಲಂಭಿತರಿಗಾಗಿ ನೀಡುತ್ತಿರುವ ಸೌಲಭ್ಯಗಳ ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ. |
| ಆ) | ಕಳೆದ 2 ತಿಂಗಳಿಂದ ಕಾರ್ಮಿಕರ ನೋಂದಣಿ ಮತ್ತು ಕಾರ್ಮಿಕ ಕಾರ್ಡ್ ವಿತರಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಬಂದಿದ್ದಲ್ಲಿ, ಮಾಹಿತಿ ನೀಡುವುದು) | ಕಳೆದ 2 ತಿಂಗಳಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ನೋಂದಣಿ ಮತ್ತು ಕಾರ್ಮಿಕರ ಕಾರ್ಡ್ ವಿತರಿಸದಿರುವುದು ಮಂಡಳಿಯ ಗಮನಕ್ಕೆ ಬಂದಿದೆ.<br><br>ನೋಂದಣಿಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ಅರ್ಜಿಗಳು ಸೇವಾ ಸಿಂಧು ತಂತ್ರಾಂಶದಲ್ಲಿ ಸ್ವೀಕೃತವಾಗುತಿದ್ದ ಹಿನ್ನಲೆಯಲ್ಲಿ, ಕಾಲ ಮಿತಿಯಲ್ಲಿ ವಿಲೇವಾರಿಗಾಗಿ ಹೆಚ್ಚಿನ ಅರ್ಜಿಗಳು ಬಾಕಿ ಇದ್ದುದರಿಂದ ಸ್ವಲ್ಪ ಕಾಲಾವಧಿಯವರೆಗೆ ನೋಂದಣಿಯನ್ನು ಸ್ಥಗಿತಗೊಳಿಸಲಾಗಿತ್ತು. |
| ಇ) | ಕಾರ್ಮಿಕರ ನೋಂದಣಿ ಮತ್ತು ಕಾರ್ಮಿಕ ಕಾರ್ಡ್ ವಿತರಿಸುವ ಕಾರ್ಯವನ್ನು ಯಾವಾಗ ಪ್ರಾರಂಭ ಮಾಡಲಾಗುವುದು; | ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ನೋಂದಣಿ ಪ್ರಕ್ರೀಯೆಯನ್ನು ದಿನಾಂಕ: 09-03-2022 ರಿಂದ ಪುನಃ ಪ್ರಾರಂಭಿಸಲಾಗಿರುತ್ತದೆ. |
| ಈ) | ಇದುವರೆಗೂ ನೋಂದಣಿಯಾಗಿರುವ ಕಾರ್ಮಿಕರ ಸಂಖ್ಯೆಯೆಷ್ಟು; (ಜಿಲ್ಲಾವಾರು, ವಿಧಾನಸಭಾ ಕ್ಷೇತ್ರವಾರು ಮಾಹಿತಿ ನೀಡುವುದು) | 28,94,389 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಿರುತ್ತಾರೆ. ಜಿಲ್ಲಾವಾರು ವಿವರವನ್ನು **ಅನುಬಂಧ-02** ರಲ್ಲಿ ನೀಡಲಾಗಿದೆ.<br>ವಿಧಾನಸಭಾ ಕ್ಷೇತ್ರವಾರು ಮಾಹಿತಿಯನ್ನು ಮಂಡಳಿಯಲ್ಲಿ ನಿರ್ವಹಿಸಿರುವುದಿಲ್ಲ. |

| | | |
|---|---|---|
| ಉ) | ಕಾರ್ಮಿಕ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗುತ್ತಿಗೆ /ಹೊರಗುತ್ತಿಗೆ ನೌಕರರೆಷ್ಟು; ಇವರಿಗೆ ನೀಡುತ್ತಿರುವ ಸೌಲಭ್ಯಗಳೇನು? (ಮಾಹಿತಿ ನೀಡುವುದು) | ಮಂಡಳಿಯವತಿಯಿಂದ ಮಂಡಳಿಗೆ ಹಾಗೂ ರಾಜ್ಯದ ಕಾರ್ಮಿಕ ಇಲಾಖೆಯ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಕಛೇರಿಗಳಿಗೆ ಮಂಡಳಿಯ ಕೆಲಸಕ್ಕಾಗಿ ವಿವಿಧ ಏಜೆನ್ಸಿಗಳ ಮೂಲಕ ಹೊರಗುತ್ತಿಗೆ ಆಧಾರದ ಮೇಲೆ 530 ನೌಕರರನ್ನು ನೇಮಿಸಿಕೊಳ್ಳಲಾಗಿದೆ. ಇವರುಗಳಿಗೆ Minimum Wages Act, 1948 ಪ್ರಕಾರ ಅನ್ವಯವಾಗುವ ವೇತನದ ಜೊತೆಗೆ PF, ESIC ಸೌಲಭ್ಯಗಳನ್ನು ನೀಡಲಾಗುತ್ತಿದೆ. |

**ಕಾಇ 180 ಎಲ್‌ಇಟಿ 2022**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ-01

## ಮಂಡಳಿಯ ವತಿಯಿಂದ ನೋಂದಾಯಿತ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣ ಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ( ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
5. ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ( ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆ ವೆಚ್ಚ:ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರಸಂ | ತರಗತಿ (ಉತ್ತೀರ್ಣಕ್ಕೆ) | |
|---|---|---|
| 1 | ಕೆಜಿ/ ಪೂರ್ವ ಶಾಲೆ /ನರ್ಸರಿ (ವರ್ಷ 3 ರಿಂದ 5) | 5,000 |
| 2 | 1 ರಿಂದ 4ನೇ ತರಗತಿ | 5,000 |
| 3 | 5 ರಿಂದ 8ನೇ ತರಗತಿ | 8,000 |
| 4 | 9 ಹಾಗೂ 10ನೇ ತರಗತಿ | 12,000 |
| | ಪದವಿ ಪೂರ್ವ | |
| 5 | ಪ್ರಥಮ ಪಿಯುಸಿ ಮತ್ತುದ್ವಿತೀಯಪಿ.ಯು.ಸಿ | 15,000 |
| 6 | ಪಾಲಿಟೆಕ್ನಿಕ್ / ಡಿಪ್ಲಮಾ/ ಐಟಿಐ | 20,000 |
| 7 | ಬಿಎಸ್‌ಸಿ ನರ್ಸಿಂಗ್/ ಜಿಎನ್‌ಎಮ್/ ಎಎನ್‌ಎಮ್/ ಪಾರಮೆಡಿಕಲ್ ಕೋರ್ಸ್ | 40,000 |
| 8 | ಡಿ.ಎಡ್ | 25,000 |
| | ಬಿ.ಎಡ್ | 35,000 |
| 9 | ಪದವಿ ಪ್ರತಿ ವರ್ಷಕ್ಕೆ (ಯಾವುದೇ ಪದವಿ) | 25,000 |

| | | |
|---|---|---|
| | | 30,000 |
| 10 | ಎಲ್‌ಎಲ್‌ಬಿ / ಎಲ್‌ಎಲ್‌ಎಮ್ | 35,000 ಗರಿಷ್ಠ |
| 11 | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 2 ವರ್ಷಅವಧಿಗೆ ಒಳಪಟ್ಟು |
| ತಾಂತ್ರೀಕ/ ವೈದ್ಯಕೀಯಎನ್‌ಇಇಟಿಅಥವಾ ಕೆಸಿಇಟಿ | | |
| 12 | ಬಿಇ / ಬಿ.ಟೆಕ್‌ಅಥವಾ ಸಂಬಂಧಪಟ್ಟಯೂಜಿಕೋರ್ಸ್ | ಸದರಿ ಕೋರ್ಸ್‌ನಗರಿಷ್ಠ 2 ವರ್ಷಅವಧಿಗೆ ಒಳಪಟ್ಟು ವಾರ್ಷಿಕ ರೂ.50,000 |
| 13 | ಎಮ್.ಟೆಕ್/ ಎಮ್ ಇ ( ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕೋತ್ತರಕೋರ್ಸ್) | ಸದರಿ ಕೋರ್ಸ್‌ನಗರಿಷ್ಠ ಅವಧಿಗೆ ಒಳಪಟ್ಟು ವಾರ್ಷಿಕರೂ. 60,000 |
| 14 | ವೈದ್ಯಕೀಯ (ಎಮ್‌ಬಿಬಿಎಸ್ /ಬಿಎಎಮ್‌ಎಸ್ / ಬಿಡಿಎಸ್ /ಬಿಹೆಚ್‌ಎಮ್‌ಎಸ್‌ಕೋರ್ಸ್‌ಗೆ ಅಥವಾ ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕೋತ್ತರ ಕೋರ್ಸ್ | ರೂ.60,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು ) |
| | ಎಮ್‌ಡಿ | ರೂ. 75,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು) |
| 15 | ಪಿಹೆಚ್‌ಡಿ / ಎಮ್. ಫಿಲ್ (ಯಾವುದೇ ವಿಷಯ) | ಪಿಹೆಚ್‌ಡಿಗೆಗರಿಷ್ಠ ಮೂರು ವರ್ಷಗಳಿಗೆ ಹಾಗೂ ಎಮ್‌ಫಿಲ್‌ಗೆ 1 ವರ್ಷಕ್ಕೆ ಪ್ರತಿ ವರ್ಷ ರೂ. 25,000 (ಯೂಜಿಸಿಯ ಜೂನಿಯರ್‌ರಿಸರ್ಚ್ ಫೆಲೋಶಿಫ್‌ಗೆ ಆಯ್ಕೆಯಾಗಿರುವ ಅಭ್ಯರ್ಥಿಗಳು ಹಾಗೂ ಮತ್ತು ರಾಜ್ಯ ಸರ್ಕಾರದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಹಾಗೂ ಯೂಜಿಸಿ ನಿಯಮಗಳನ್ವಯ ವೇತನ ಅನುದಾನಕ್ಕೆ ಒಳಪಡುವ ಹುದ್ದೆಗಳಲ್ಲಿ ಅನುದಾನಿತ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಈ ಸೌಲಭ್ಯವನ್ನು ಪಡೆಯಲು ಅರ್ಹರಿರುವುದಿಲ್ಲ. |

| | | |
|---|---|---|
| 16 | ಐಐಟಿ/ಐಐಐಟಿ/ ಐಐಎಮ್/ ಎನ್ಐಟಿ/ ಐಐಎಸ್ಇಆರ್/ ಎಐಐಎಮ್ಎಸ್ /ಎನ್ಎಲ್ಯೂ ಮತ್ತು ಭಾರತ ಸರ್ಕಾರದ ಮಾನ್ಯತೆ ಪಡೆದ ಕೋರ್ಸ್‌ಗಳು | ಪಾವತಿಸಿದ ಬೋದನಾ ಶುಲ್ಕ |

12. **ವೈದ್ಯಕೀಯ ಸಹಾಯಧನ (ಕಾರ್ಮಿಕಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರಅವಲಂಭಿತರಿಗೆರೂ.300/- ರಿಂದರೂ.10,000/-ವರೆಗೆ
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿರೂ.5,00,000/-, ಸಂಪೂರ್ಣ ಶಾಶ್ವತದುರ್ಬಲತೆಯಾದಲ್ಲಿ **ರೂ.2,00,000/- ಮತ್ತುಭಾಗಶಃ** ಶಾಶ್ವತದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದತೊಂದರೆಗೆ ಸಂಬಂಧಿತಚಿಕಿತ್ಸೆ, ಮೂತ್ರ ಪಿಂಡದಲ್ಲಿನಕಲ್ಲುತೆಗೆಯುವಚಿಕಿತ್ಸೆ, ಮೆದುಳಿನ ರಕ್ತಸ್ರಾವದಚಿಕಿತ್ಸೆ, ಅಲ್ಸರ್‌ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್‌ಚಿಕಿತ್ಸೆ, ಇತರೆಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾಅವರಇಬ್ಬರು ಮಕ್ಕಳ ಮದುವೆಗೆತಲಾ **ರೂ.50,000/-**
16. **ಫಲಾನುಭವಿಯ ಮಕ್ಕಳು ಯುಪಿಎಸ್‌ಸಿ, ಕೆಪಿಎಸ್‌ಸಿ ಹುದ್ದೆಗಳಿಗಾಗಿ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಎದುರಿಸಲು ಪ್ರತಿಷ್ಟಿತ ಸಂಸ್ಥೆಗಳಿಂದ ತರಬೇತಿ ಮತ್ತುಅವರ ಮಕ್ಕಳು ಹೊರದೇಶಗಳಲ್ಲಿ ಉನ್ನತ ವ್ಯಾಸಂಗ ಮಾಡಲುತಗಲುವ ವೆಚ್ಚವನ್ನು ಮಂಡಳಿವತಿಯಿಂದ ಭರಿಸಲಾಗುವುದು.**
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತಕಟ್ಟಡಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿತೊಡಗಿರುವ ನೋಂದಾಯಿತಕಾರ್ಮಿಕರಇಬ್ಬರು ಮಕ್ಕಳಿಗೆ ( ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕರೂ.6,000/- ಗಳ ಸಹಾಯಧನ.

ಅನುಬಂಧ- 2

| ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೋಂದಣಿಯಾದ ಫಲಾನುಭವಿಗಳ ಜಿಲ್ಲಾವಾರು ವಿವರ | | |
|---|---|---|
| **SL.No** | **District Name** | **Total** |
| 1 | BAGALKOT | 90571 |
| 2 | BANGALORE | 240059 |
| 3 | BELGAUM | 133227 |
| 4 | BELLARY | 89038 |
| 5 | BIDAR | 189092 |
| 6 | BIJAPUR | 86290 |
| 7 | CHAMARAJA NAGAR | 32934 |
| 8 | CHIKBALLAPUR | 32919 |
| 9 | CHIKMAGALUR | 64236 |
| 10 | CHITRADURGA | 94229 |
| 11 | DAKSHINA KANNADA | 62990 |
| 12 | DAVANAGERE | 103861 |
| 13 | DHARWAD | 98039 |
| 14 | GADAG | 55992 |
| 15 | GULBARGA | 214165 |
| 16 | HASSAN | 53478 |
| 17 | HAVERI | 143894 |
| 18 | KODAGU | 5282 |
| 19 | KOLAR | 87569 |
| 20 | KOPPAL | 101139 |
| 21 | MANDYA | 20638 |
| 22 | MYSORE | 77205 |
| 23 | RAICHUR | 53804 |
| 24 | RAMANAGARA | 36369 |
| 25 | SHIMOGA | 106268 |
| 26 | TUMKUR | 62582 |
| 27 | UDUPI | 46034 |
| 28 | UTTARA KANNADA | 75295 |
| 29 | Yadgiri | 87190 |
|  | **Total** | **28,94,389** |